# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

'MUNJAVU' Kannada Weekly. KOPPA - CHM. ಫೋನ್: 114

6ನೇ ವರ್ಷ 2ನೇ ಸಂಚಿಕೆ ಕೊಪ್ಪ 23-8-1987 ಭಾನುವಾರ ಬೆಲೆ 50 ಪೈಸೆ




## ಕೆರೆಕಟ್ಟೆ-ಶೃಂಗೇರಿ-ಕೊಪ್ಪ-ತೀರ್ಥಳ್ಳಿ ಮಾರ್ಗ ರಾಜ್ಯ ಹೆದ್ದಾರಿಯಾಗಿ ಪರಿವರ್ತನೆ

(ವರದಿ : ಕಲ್ಕುಳಿ ವಿಠಲ ಹೆಗ್ಡೆ)

ಶೃಂಗೇರಿ : ಕುದುರೆಮುಖ-ಮಂಗಳೂರು ರಾಜ್ಯ ಹೆದ್ದಾರಿಯ 'ಎಸ್. ಕೆ. ಬಾರ್ಡರ್'ನಿಂದ ಕೆರೆಕಟ್ಟೆ, ಶೃಂಗೇರಿ ಮೂಲಕ ತೀರ್ಥಹಳ್ಳಿ, ಆನಂದಪುರ ಮಾರ್ಗವಾಗಿ ರಾಣಿಬೆನ್ನೂರಿನ ಸಮೀಪ ಬೆಂಗಳೂರು-ಪುಣೆ ರಾಷ್ಟ್ರೀಯ ಹೆದ್ದಾರಿಗೆ ಸೇರುವಂತೆ ಈ ರಸ್ತೆಯನ್ನು ರಾಜ್ಯ ಹೆದ್ದಾರಿಯಾಗಿ ಸರ್ಕಾರ ಘೋಷಿಸಿದೆ.

ಮೊದಲಿಗೆ ಈ ಹೆದ್ದಾರಿಗೆ ಕೊಪ್ಪ ಸೇರ್ಪಡೆಯಾಗದೆ, ಶೃಂಗೇರಿಯಿಂದ ಕಮ್ಮರಡಿ ಮೂಲಕ ಹೋಗುವಂತೆ ಸಲಹೆ ಮಾಡಲಾಗಿದ್ದು, ಕೇವಲ 6 ಕಿ. ಮೀ. ಹೆಚ್ಚಳಕ್ಕಾಗಿ ಪ್ರಮುಖ ತಾ॥ ಕೇಂದ್ರವಾದ ಕೊಪ್ಪ ಬಿಟ್ಟು ಹೋಗುವುದು ಬೇಡವೆಂಬ ಶಾಸಕ ಗೋವಿಂದಗೌಡರ ಸಲಹೆಯಂತೆ ಮಾರ್ಪಾಡು ಮಾಡಲಾಯಿತೆಂದು ತಿಳಿದು ಬಂದಿದೆ.

ಆಗುಂಬೆ ಘಾಟಿ ಯಾವ ಕ್ಷಣದಲ್ಲಾದರೂ ಕುಸಿದು ಸಂಚಾರ ತುಂಡಾಗುವ ಸಂಭವ ಇರುವುದಲ್ಲದೆ, ಮಾಲತಿ ಅಣೆಕಟ್ಟೆಯಿಂದ ಶೃಂಗೇರಿ–ಆಗುಂಬೆ ಮಾರ್ಗ ಕೂಡ ಮುಳುಗಡೆಯಾಗುವುದರಿಂದ, ಈ ಹೊಸ ಮಾರ್ಗವೇ ಮಂಗಳೂರಿಗೆ ಅತ್ಯಂತ ಹತ್ತಿರದ ಮಾರ್ಗವಾಗಲಿದೆ.

ಈ ಮಾರ್ಗದ 'ಬಡ್ತಿ'ಗಾಗಿ ಶ್ರಮಿಸಿದ ಶಾಸಕರನ್ನು ಕ್ಷೇತ್ರದ ಜನತೆಯ ಪರವಾಗಿ ಶೃಂಗೇರಿ ತಾ॥ ಜನತಾ ಅಧ್ಯಕ್ಷರು ಅಭಿನಂದಿಸಿದ್ದಾರೆ.

## ಬಾಯಿ ಕ್ಯಾನ್ಸರಿಗೀಡಾಗಿರುವ ಕೃಷಿ ಕಾರ್ಮಿಕನಿಗೆ ನೆರವಾಗಿ

ಕೊಪ್ಪ: ಇಲ್ಲಿಗೆ ಸಮೀಪದ ಹುಲ್ಲುಮಗ್ಗೆಯ ಹರಿಜನ ಕೃಷಿ ಕಾರ್ಮಿಕ ಪಿಸರ ಎಂಬವರಿಗೆ ಬಾಯಿ ಕ್ಯಾನ್ಸರ್ ಉಂಟಾಗಿದ್ದು, ಹುಬ್ಬಳ್ಳಿಯ ಕ್ಯಾನ್ಸರ್ ಸಂಸ್ಥೆಯಲ್ಲಿ ಚಿಕಿತ್ಸೆಗೆ ವ್ಯವಸ್ಥೆ ಮಾಡಲಾಗಿದೆ. 'ಕೋಬಾಲ್ಟ್' ಚಿಕಿತ್ಸೆಗೆ ಆಗಾಗ್ಗೆ ಹೋಗಿ ಬರುವುದು ಮತ್ತು ಇತರ ಖರ್ಚುಗಳಿಗಾಗಿ ಸಾಕಷ್ಟು ಹಣ ಬೇಕಾಗಲಿದ್ದು, ದಾನಿಗಳು ಈ ಕೆಳಗಿನ ವಿಳಾಸಕ್ಕೆ ಉದಾರವಾಗಿ ನೆರವು ಕಳಿಸಿಕೊಡಬೇಕಾಗಿ ಅವರ ಪತ್ನಿ ವಿನಂತಿಸಿದ್ದಾರೆ. ವಿಳಾಸ : ಶ್ರೀಮತಿ ಶೇಷಿ, ಜನತಾ ಕಾಲೋನಿ, ಹುಲ್ಲುಮಗ್ಗೆ, ಕೊಪ್ಪ

## ಗ್ರಾಮೀಣ ಕುಶಲಕರ್ಮಿ ಯೋಜನೆಯಲ್ಲಿ ಕೈಗಾರಿಕಾ ತರಬೇತಿಗೆ ಅರ್ಜಿ ಆಹ್ವಾನ

ಕೊಪ್ಪ : ಗ್ರಾಮೀಣ ಕುಶಲ ಕರ್ಮಿ ಯೋಜನೆಯಡಿ ವಿವಿಧ ಕಸುಬುಗಳು ಮತ್ತು ಕೈಗಾರಿಕೆಗಳಲ್ಲಿ (ಹೊಲಿಗೆ ತರಬೇತಿ ಇಲ್ಲ) 6 ತಿಂಗಳ ತರಬೇತಿಗಾಗಿ 18 ರಿಂದ 30 ವರ್ಷದೊಳಗಿನ ಅರ್ಹರಿಂದ ಅರ್ಜಿ ಆಹ್ವಾನಿಸಲಾಗಿದೆ ಸ್ಟೈಪಂಡ್ : ತಿಂಗಳಿಗೆ 200 ರೂ ; **ಕಡೇ ದಿನಾಂಕ 31-8-87.** ತಹಸೀಲ್ದಾರರಿಂದ ವರಮಾನದ ದೃಢೀಕರಣ ಪತ್ರ ಲಗತ್ತಿಸಬೇಕು. ಹೆಚ್ಚಿನ ವಿವರಗಳಿಗೆ ಕೈಗಾರಿಕಾ ವಿಸ್ತರಣಾಧಿಕಾರಿಗಳನ್ನು ಸಂಪರ್ಕಿಸಬಹುದು.

## "ವಿಷದ ಹೆಂಡ ಬೇಡ, ವಸತಿ ಶಾಲೆ ಬೇಕು"

ಕೊಪ್ಪ : "ಕುರಿ, ಕೋಳಿ ಕೊಟ್ಟಿದ್ದು ಸಾಕು ; ಹೋಬಳಿಗೊಂದು ವಸತಿ ಶಾಲೆ ಬೇಕು" ಎಂಬ ದಲಿತರ ಬೇಡಿಕೆ ಈಡೇರಿಸುವ ಬದಲು **ವಿಷಯುಕ್ತ ಹೆಂಡವನ್ನು ಇನ್ನಷ್ಟು ಮತ್ತಷ್ಟು ಹಳ್ಳಿ ಹಳ್ಳಿಗಳಲ್ಲಿ ಹಂಚುತ್ತಿರುವ ಸರ್ಕಾರದ ವಿರುದ್ಧ** ಪ್ರತಿಭಟಿಸಲು ಕರ್ನಾಟಕ ದಲಿತ ಸಂಘರ್ಷ ಸಮಿತಿ ಆಗಸ್ಟ್ 14 ರಂದು "ವಿಷದ ಹೆಂಡ ಬೇಡ. ವಸತಿ ಶಾಲೆ ಬೇಕು" ಎಂಬ ಬೇಡಿಕೆಯೊಡನೆ ರಾಜ್ಯಾದ್ಯಂತ ಮೆರವಣಿಗೆ, ಸಭೆ ನಡೆಸಿ, ಎಲ್ಲಾ ಜಿಲ್ಲಾ ಕೇಂದ್ರಗಳಿಂದಲೂ ಸರ್ಕಾರಿ ಹೆಂಡದ ಐದೈದು ಬಾಟಲಿಗಳನ್ನು ಜಿಲ್ಲಾಧಿಕಾರಿಗಳ ಮೂಲಕ 'ಸರ್ಕಾರಕ್ಕೆ ವಾಪಸು ಕಳಿಸುವ' ಕಾರ್ಯಕ್ರಮವನ್ನು ಯಶಸ್ವಿಯಾಗಿ ನಡೆಸಿತು.

## ಗಂಧ ಸಹಿತ ಕಾರು ವಶ : ಇಬ್ಬರ ಬಂಧನ

ಕೊಪ್ಪ : ಇಲ್ಲಿನ ಅರಣ್ಯ ಸಂಚಾರಿ ದಳದ ಫಾರೆಸ್ಟರ್ ಎಚ್. ಮಂಜಪ್ಪ, ಗಾರ್ಡ್‌ಗಳಾದ ಭೋಜರಾಜ ಅರಸ್, ವೆಂಕಟನಾಯ್ಕ, ಶಿವಣ್ಣ, ಡ್ರೈವರ್ ಸುಲೇಮಾನ್ ಹಾಗೂ ಬಾಳೆಹೊನ್ನೂರು ವಲಯದ ಸಿಬ್ಬಂದಿಗಳು ಆ. 18 ರಂದು ಎಂ ಇ ವಿ 7025 ನಂಬರಿನ ಕಾರನ್ನು ಅನುಮಾನದ ಮೇಲೆ ಬೆನ್ನಟ್ಟಿ ಬೆದರು ಗುಂಡು ಹಾರಿಸಿ ತಡೆಹಿಡಿದು, 40 ಸಾವಿರ ರೂ. ಬೆಲೆಯ ಗಂಧದೊಂದಿಗೆ ವಶಪಡಿಸಿಕೊಂಡರು. ಕಾರಿನ ಚಾಲಕ ಮತ್ತು ಇನ್ನೊಬ್ಬ ಸೆರೆಸಿಕ್ಕಿದ್ದು, ಇನ್ನಿಬ್ಬರು ಪರಾರಿಯಾಗಿದ್ದಾರೆ. ತನಿಖೆ ನಡೆಯುತ್ತಿದೆ.

**30-8-87ರ ಸಂಚಿಕೆಗೆ ರಜ**

ಈ ವಾರ ಚಿತ್ರದುರ್ಗದಲ್ಲಿ ರಾಜ್ಯ ಪತ್ರಕರ್ತರ ಸಮ್ಮೇಳನ, ಪ್ರವಾಸ ಮತ್ತಿತರ ಕಾರ್ಯಕ್ರಮಗಳಿಂದಾಗಿ ನಮ್ಮ 30.8.87ರ ಸಂಚಿಕೆ ಪ್ರಕಟವಾಗುವುದಿಲ್ಲ.

—ಸಂ.

## ಸಂಬಳ ವಿಳಂಬ ಸರಿಪಡಿಸಲು ಜಿಲ್ಲಾ ಪರಿಷತ್ತಿಗೆ ಮನವಿ

ಕೊಪ್ಪ: ಜಿಲ್ಲಾ ಪರಿಷತ್ ಆಶ್ರಯದ ವಿವಿಧ ಇಲಾಖೆಗಳ ನೌಕರರಿಗೆ ಸಂಬಳ ಬಟವಾಡೆ ವಿಳಂಬವಾಗುತ್ತಿದ್ದು. ಜಿಲ್ಲೆಯ ಏಳು ಕಿರಿಯ ಕಾಲೇಜುಗಳಿಗೆ ಈ ಬಾರಿ ಸಂಬಳ ಬಂದಿರಲಿಲ್ಲ ಆ. 13ರಂದು ಡಿಡಿಪಿಐಗೆ ಚಳುವಳಿ ಬೆದರಿಕೆಯೊಂದಿಗೆ ನೌಕರರು ಮನವಿ ಸಲ್ಲಿಸಿದಾಗ ಅಲಾಟ್‌ಮೆಂಟ್ ನೀಡಲಾಯಿತು ಎಂದು ತಿಳಿದು ಬಂದಿದೆ.

ಆ. 17ರಂದು ಇಲ್ಲಿ ಮಂಡಲ ಪ್ರಧಾನ/ಉಪ ಪ್ರಧಾನರ ತರಬೇತಿ ಶಿಬಿರ ಉದ್ಘಾಟನೆಗೆ ಬಂದಿದ್ದ ಜಿ.ಪ. ಉಪಾಧ್ಯಕ್ಷರಿಗೆ ಕಿರಿಯ ಕಾಲೇಜು ಸಿಬ್ಬಂದಿ ವರ್ಗದವರು ಮನವಿ ಸಲ್ಲಿಸಿದಾಗ, ತಿಂಗಳ ಕೊನೇ ಕೆಲಸದ ದಿನದಂದು ಎಲ್ಲಾ ಇಲಾಖೆಗಳ ಸಂಬಳ ಬಟವಾಡೆಗೆ ಕ್ರಮ ಕೈಗೊಳ್ಳುವುದಾಗಿ ಭರವಸೆ ನೀಡಿದರು

## ಶೃಂಗೇರಿ ತಾ. ವ್ಯ. ಮಾ. ಸ. ಸಂಘದಲ್ಲಿ "ಅವ್ಯವಹಾರ" ರಾಮಪ್ಪಯ್ಯ ಸಮರ್ಥನೆ, ಪ್ರತಿ ಸವಾಲು

ಶೃಂಗೇರಿ: ಇಲ್ಲಿನ ತಾ. ವ್ಯ. ಮಾ. ಸ. ಸಂಘದಲ್ಲಿ ಹೇರಳವಾಗಿ ಅವ್ಯವಹಾರ ನಡೆದಿದೆಯೆಂದು ತಾನು ಜು 25ರ ಜಿ. ಪ. ಸಭೆಯಲ್ಲಿ ಮಾಡಿದ ಆಪಾದನೆಯನ್ನು ಸಾಬೀತು ಮಾಡುವುದಾಗಿ ಜಿ.ಪ. ಸದಸ್ಯ ಕೆ. ವಿ. ರಾಮಪ್ಪಯ್ಯ ಸಂಘದ ಅಧ್ಯಕ್ಷರಿಗೆ ಪ್ರತಿ ಸವಾಲು ಹಾಕಿದ್ದಾರೆ

ಈ ಬಗ್ಗೆ ಸಂಬಂಧಪಟ್ಟ ಇಲಾಖೆಯೊಂದಿಗೆ ವ್ಯವಹರಿಸುತ್ತಿದ್ದು, ವಿಚಾರಣೆಯ ಫಲಿತಾಂಶ ಹೊರಬರುವವರೆಗೆ ಅಧ್ಯಕ್ಷರು ರಾಜಕೀಯ ಪ್ರೇರಿತವಾದ ಅಸಂಬದ್ಧ ಹೇಳಿಕೆಗಳನ್ನೂ, ಕಾರ್ಯಕಾರಿ ಸಮಿತಿಯ ನಿರ್ಣಯಗಳನ್ನು ಹೊರಡಿಸದೆ ತಾಳ್ಮೆ ವಹಿಸಲಿ. ಆಗ ಯಾರು ಪರಿಶುದ್ಧರೆಂಬುದು ಗೊತ್ತಾಗುತ್ತದೆ–ಎಂದು ಅವರು ಹೇಳಿದ್ದಾರೆ.

"ನಾನು ಭೂ ಅಭಿವೃದ್ಧಿ ಬ್ಯಾಂಕ್ ಅಧ್ಯಕ್ಷನಾಗಿದ್ದ ಅವಧಿಯಲ್ಲಿ ಹಂಚಿನಮನೆ ಜಮೀನನ್ನು ಲಪಟಾಯಿಸಿದೆನೆಂಬ ಅರ್ಥ ಬರುವಂತೆ ಅವರು ('ಮುಂಜಾವು'ನಲ್ಲಿ) ಹೇಳಿದ್ದಾರೆ ಆದರೆ ಅದಕ್ಕೂ ಮುಂಚೆಯೇ ಆ ಜಮೀನುಗಳು ಹರಾಜಿಗೆ ಬಂದಿದ್ದು, ಸಹಕಾರ ಇಲಾಖೆ ಮಾಡಿದ ಹರಾಜಿನಲ್ಲಿ ಅದನ್ನು ಪಡೆದವರಿಂದ ನ್ಯಾಯವಾದ ಕ್ರಯಕ್ಕೆ ನಾನು ಪಡೆದಿದ್ದೇನೆ. ಕಳೆದ 30 ವರ್ಷಗಳಿಂದ ನೂರಾರು ಸಂಘ ಸಂಸ್ಥೆಗಳಲ್ಲಿ ದುಡಿದಿದ್ದು, ಅಲ್ಲೆಲ್ಲ ನಾನು ಸ್ವಾರ್ಥ, ಭ್ರಷ್ಟಾಚಾರ, ಸ್ವಜನ ಪಕ್ಷಪಾತ ಮಾಡಿದ್ದರೆ ಜಿ.ಪ. ಚುನಾವಣೆಯಲ್ಲಿ ಅಷ್ಟೊಂದು ಬಹುಮತದಿಂದ ಜನತೆ ನನ್ನನ್ನು ಆರಿಸುತ್ತಿರಲಿಲ್ಲ" ಎಂದು ರಾಮಪ್ಪಯ್ಯ ಸಮರ್ಥಿಸಿಕೊಂಡಿದ್ದಾರೆ.

## ಎಲ್ಲೈಸಿ ಅಧಿಕಾರಿಗೆ ಮುಂಬಡ್ತಿ, ವರ್ಗ

ಕೊಪ್ಪ : ಇಲ್ಲಿ ಜೀವ ವಿಮೆ ಅಭಿವೃದ್ಧಿ ಅಧಿಕಾರಿಯಾಗಿದ್ದ ಕೆ. ಎನ್. ಅನಂತ ರಾಮಯ್ಯ ಅವರಿಗೆ ಅಸಿಸ್ಟೆಂಟ್ ಬ್ರಾಂಚ್ ಮೇನೇಜರ್ ಆಗಿ ಬಡ್ತಿಯೊಂದಿಗೆ ಬಾಗಲಕೋಟೆಗೆ ವರ್ಗವಾಗಿದೆ.

ಯಶಸ್ವಿ ಜೀವವಿಮಾ ಅಧಿಕಾರಿಯಾಗಿದ್ದ ಇವರು ಕಳೆದ ಎರಡು ವರ್ಷಗಳಿಂದಲೂ 1 ಕೋಟಿ ರೂ.ಗೆ ಮಿಕ್ಕಿ ಜೀವ ವಿಮಾ ವ್ಯವಹಾರವನ್ನು ಸಾಧಿಸಿದ್ದರು.

## ಜಿಲ್ಲೆ ಬರಗಾಲ ಪೀಡಿತವೆಂದು ಘೋಷಿಸಲು ಒತ್ತಾಯ

ಕೊಪ್ಪ : ಈ ವರ್ಷ ಮಳೆಗಾಲ ವಿಫಲವಾಗಿರುವುದರಿಂದ ಚಿಕ್ಕಮಗಳೂರು ಜಿಲ್ಲೆಯನ್ನು ಬರ ಪೀಡಿತ ಪ್ರದೇಶವೆಂದು ಘೋಷಿಸುವಂತೆ ಇಲ್ಲಿನ 'ಜಿಲ್ಲಾ ಅಡಿಕೆ ಬೆಳೆಗಾರರ ಸಂಘ' ಜಿಲ್ಲಾಧಿಕಾರಿಗಳನ್ನು ಒತ್ತಾಯಿಸಿದೆ.

ಅಲ್ಲದೆ ಮಳೆಯ ಕೊರತೆಯಿಂದ ಅಡಿಕೆ ತೋಟಗಳಿಗೂ ಫಸಲಿಗೂ ವಿಪರೀತ ಹಾನಿಯಾಗಿ ಶೇ. 25ರಷ್ಟು ಸಹ ಫಸಲು ಬರುವುದು ಕಷ್ಟವಾಗಿದ್ದು, ತೋಟಗಾರಿಕೆ ಇಲಾಖೆ ರೈತರಿಗೆ ಸೂಕ್ತ ಪರಿಹಾರ ನೀಡಬೇಕೆಂದೂ ಸಂಘ ಒತ್ತಾಯಿಸಿದೆ.

# ನೀಲಗಿರಿ ಮತ್ತು ಕಾರಂತರು

**ಅಣುಸ್ಥಾವರದ ಬಗ್ಗೆ ಗೊಂದಲ ಹುಟ್ಟಿಸುವ ಶಿವರಾಮ ಕಾರಂತರು ಈ ನೀಲಗಿರಿಯ ಬಗ್ಗೆ ಕೂಡ ಅದೇ ಬಗೆಯ ಗೊಂದಲಮಯ ಅಭಿಪ್ರಾಯ ವ್ಯಕ್ತಪಡಿಸಿ ರೈತರು ದಿಕ್ಕೆಡುವಂತೆ ಮಾಡಿದ್ದಾರೆ. ಸಾರಾಸಗಟಾಗಿ ನೀಲಗಿರಿ ಬೆಳೆದು ಈಗಾಗಲೇ ಅದರ 'ಫಲ' ಉಣ್ಣುತ್ತಿರುವ ರೈತರು ಕಾರಂತರ ಮಾತುಗಳನ್ನು 'ಅಪ್ಪಟ ವೈಜ್ಞಾನಿಕ' ಎಂದು ನಂಬಬಹುದಾದ ಸಾಧ್ಯತೆ ಇರುವುದರಿಂದ, ನೀಲಗಿರಿ ಈಗಾಗಲೇ ನೀಡಿದ ಎಲ್ಲ ಅನಾಹುತಗಳ ಬಗ್ಗೆಯೂ ಮತ್ತೊಮ್ಮೆ ಯೋಚಿಸಬೇಕಾಗಿದೆ.**

ಎರಡು ವರ್ಷಗಳಿಗೂ ಹಿಂದೆ ನಮ್ಮ ಪತ್ರಿಕೆ ('ಲಂಕೇಶ್ ಪತ್ರಿಕೆ') ನೀಲಗಿರಿ ಮರದ ಬಗ್ಗೆ ಎರಡು ಲೇಖನಗಳನ್ನು ಬರೆದಿದ್ದಲ್ಲದೆ, ಸತ್ಯಮೂರ್ತಿ ಆನಂದೂರು ಈ ಗಿಡದ ಬಗ್ಗೆ ತಜ್ಞರ ಅಭಿಪ್ರಾಯವನ್ನೇ ಆಧರಿಸಿ ವಿಶೇಷ ಲೇಖನ ಬರೆದಿದ್ದರು. ಈ ಲೇಖನಗಳಿಂದ ಪ್ರೇರಿತರಾಗಿ ಕೆಲವು ಕಡೆ ನೀಲಗಿರಿ ಕಡಿಯಲಾಗಿತ್ತು, ಒಮ್ಮೆ ಕಮ್ಯುನಿಸ್ಟ್ ಕಾರ್ಯಕರ್ತರು ಎಕರೆಗಟ್ಟಲೆ ಈ ಸಸ್ಯವನ್ನು ನಾಶಮಾಡಿದ್ದರು.

ಈಗ ನೀಲಗಿರಿ ಬಗ್ಗೆ ಒಂದು ಗೊಂದಲದ ಸ್ಥಿತಿಯುಂಟಾಗಿದೆ. ಏಕೆಂದರೆ ವಾರಪತ್ರಿಕೆಯೊಂದರಲ್ಲಿ ಶಿವರಾಮ ಕಾರಂತರು ಈ ನೀಲಗಿರಿ ಬಗ್ಗೆ ವಕಾಲತ್ತು ವಹಿಸಿ ಲೇಖನ ಬರೆದ ಮೇಲೆ, ನೀಲಗಿರಿ ಬಗ್ಗೆ ಹಿಂದೆ ಬರೆದವರು ಮಾತಾಡಿದವರೆಲ್ಲಾ ಅಪಪ್ರಚಾರಕರ ಗುಂಪಿಗೆ ಸೇರಿಹೋಗಿರುವುದಲ್ಲದೆ, ಕಾರಂತರದು ಕೆಲವರಿಗಂತೂ ಆಪ್ತರಿಂದ ವೇದವಾಕ್ಯವಾಗಿ ಹೋಗಿದೆ.

ಕಾರಂತರು ಸಾಹಿತ್ಯ ಕ್ಷೇತ್ರದ ಹೆಮ್ಮರ. ಸಾಹಿತ್ಯ ಪ್ರಕಾರದ ಎಲ್ಲ ರಂಗದಲ್ಲೂ ಕೈ ಆಡಿಸಿರುವುದಲ್ಲದೆ, ನಮ್ಮ ನಡುವಿನ ಎಲ್ಲಾ ಸಾಂಸ್ಕೃತಿಕ ಕ್ಷೇತ್ರದಲ್ಲೂ ಅವರ ಪಾಲು ಮತ್ತು ಪಾತ್ರ ದೊಡ್ಡದಿದೆ. ವಿಜ್ಞಾನ ವಿಷಯದಲ್ಲೂ ಅವರು ಕೆಲವು ಪುಸ್ತಕ ಪ್ರಕಟಿಸಿ ಹಲವು ಕೃತಿಗಳನ್ನು ಭಾಷಾಂತರಿಸಿರುವುದರಿಂದ, ಸಹಜವಾಗಿ ವೈಜ್ಞಾನಿಕವಾಗಿ ಅವ

**ಬಿ. ಚಂದ್ರೇಗೌಡ**

ರು ಮಂಡಿಸಿದ ವಿಷಯಕ್ಕೆ ಮಾನ್ಯತೆಯಿದೆ. ಅವರು ಈ ನೀಲಗಿರಿ ಬಗ್ಗೆ ಏನೆಲ್ಲ ವಿವರಣೆ ನೀಡಿರಲಿ, ಜನಕ್ಕೆ ಅದು ಮುಖ್ಯವಾಗುವುದಿಲ್ಲ. "ನೀಲಗಿರಿಯಿಂದ ಏನೂ ತೊಂದರೆಯಿಲ್ಲವಂತೆ ಎಂದು ಕಾರಂತರೇ ಹೇಳಿದ್ದಾರೆ" ಎಂಬ ಸುದ್ದಿ ಮಾತ್ರ ದಟ್ಟವಾಗಿ ಹರಡುತ್ತಿದೆ. ಕಾರಂತರ ಹೇಳಿಕೆ, ನೀಲಗಿರಿ ಪರವಾಗಿ ಕೂಗುತ್ತಿದ್ದ ಅವರ ಮಗ ಉಲ್ಲಾಸ ಕಾರಂತರ ಪರವಾದ ವಕಾಲತ್ತಿನಂತಿದೆ. ಮೊದಲಿನಿಂದಲೂ ನಮ್ಮಲ್ಲಿ ಏಳುವ ಯಾವುದೇ ಗೊಂದಲ ಸ್ಥಿತಿಗೆ ಜನಸಮೂಹವು ಕೆಲವು ಮಹಾನ್ ವ್ಯಕ್ತಿಗಳ ಹೇಳಿಕೆಯನ್ನು ಕಾಯುತ್ತದೆ. ಅವರ ಹೇಳಿಕೆ ಬಿತ್ತರಗೊಂಡ ನಂತರ ನೆಮ್ಮದಿಯ ಉಸಿರು ಬಿಟ್ಟು ಸುಮ್ಮನಾಗುತ್ತದೆ.

ಕಾರಂತರು 'ಈ ಸಸ್ಯ ವಿಪರೀತ ನೀರು ಕುಡಿಯುವುದಿಲ್ಲ' ಎಂಬ ಹೇಳಿಕೆ ಕೊಡುವುದರ ಜೊತೆಗೆ, ಇದು ಸಾಮಾಜಿಕವಾಗಿ ಮಾಡುತ್ತಿರುವ ಅನಾಹುತವನ್ನೊಂದಿಷ್ಟು ಪರಿಶೀಲಿಸಬಹುದಿತ್ತು. ಮೇಲು ನೋಟಕ್ಕೇ ಈ ಸಸ್ಯ ಎಂತಹ ತಿಳುವಳಿಕೆಯಿಲ್ಲದವರಿಗೂ, ತನ್ನ ಬಗ್ಗೆ ಒಂದೆರಡು ಮಾಹಿತಿಯನ್ನೊದಗಿಸುತ್ತದೆ. ನಮ್ಮ ನಾಡಿನಲ್ಲಿ ಅದು ಸಮತೋಲನದಿಂದ ಮುಂದುವರಿದಿದ್ದರೆ ಯಾರ ಕಣ್ಣೂ ಈ ಸಸ್ಯದ ಮೇಲೆ ಬೀಳುತ್ತಿರಲಿಲ್ಲ. ಆದರೀಗ ಈ ಸಸ್ಯ ಸಾಂಕ್ರಾಮಿಕವಾಗಿದೆ.

**ದಿನಬೆಳಗಾಯಿತೆಂದರೆ ಬಗರ್ ಹುಕುಂ ಸಾಗುವಳಿಯ ರೈತರೆಲ್ಲಾ, ತಮ್ಮ ಜಮೀನನ್ನು ತೆರವು ಮಾಡಿ ಈ ಗಿಡಕ್ಕೆ ಅವಕಾಶ ಮಾಡಿಕೊಡಬೇಕಿದೆ. ಈ ಬಗ್ಗೆ ಹಲವಾರು ಕಡೆ ಪ್ರತಿದಿನವೂ ರೈತರಿಗೆ ಮತ್ತು ಕಾಡಿನ ಇಲಾಖೆಯವರಿಗೆ ಹೊಡೆದಾಟಗಳಾಗುತ್ತಿವೆ. ಅಲ್ಲದೆ ಕರ್ನಾಟಕದ ಕಣ್ಣಾದ ಜಮೀನೆಲ್ಲ ನೀಲಗಿರಿ ಪಾಲಾಗುತ್ತಿವೆ. ಭೂಮಿಯಿಲ್ಲದ ಜನ ಬೇಕಾದಷ್ಟಿರುವಾಗ, ಇದ್ದಬದ್ದ ಜಮೀನೆಲ್ಲ ನೀಲಗಿರಿ ಕಾರ್ಖಾನೆಗಳಿಗೆ ಒತ್ತೆಯಾಗುತ್ತಿದೆ. ರಾಷ್ಟ್ರೀಯ ರಸ್ತೆಗಳಲ್ಲದೆ ಸಾಮಾನ್ಯ ರಸ್ತೆಗಳ ಇಕ್ಕೆಲಗಳಲ್ಲಿ ಈ ಮರದ ಸಾಲು ತೂಗುತ್ತಿದೆ. ನೀಲಗಿರಿ ಬೆಳೆಗೆ ರೈತನೇನಾದರೂ ಕೈ ಹಾಕಿದರೆ, ಮುಂದೆ ಸೃಷ್ಟಿಯಾಗಬಹುದಾದ ಅನಾಹುತಗಳಿಗೆ ಹೊಣೆಗಾರರಾಗಲು ಕಾರಂತರ ಸಮೇತ ನಾವ್ಯಾರೂ ಇರುವುದಿಲ್ಲ.**

ಈ ಮರದ ವಿರುದ್ಧ ನಮ್ಮ ರೈತರು ಸಿಡಿದೆದ್ದಿದ್ದ ಸಮಯದಲ್ಲಿ, ಸರಕಾರ ಅವರನ್ನು ಗುಜರಾತಿಗೆ ಕಳುಹಿಸಿ, ಅಲ್ಲಿ ರೈತರೇ ಬೆಳೆದಿರುವ ನೀಲಗಿರಿ ಪರಿಶೀಲಿಸಿ ಬಂದು ನೀಲಗಿರಿ ಬೆಳೆಯಿರಿ, ಅಥವ ಬೆಳೆಯಲು ಅವಕಾಶ ಮಾಡಿಕೊಡಿ ಎಂದು ಕೇಳಿಕೊಂಡಿತ್ತು. ಅದರಂತೆ ರೈತರೂ ಹೋಗಿ ಖುದ್ದು ಪರಿಶೀಲಿಸಿ ಬಂದರು. ಆದರೆ ಯಾವ ರೈತನೂ ಆ ಬೆಳೆಯನ್ನು ಸಮರ್ಥಿಸಿಕೊಳ್ಳಲೂ ಇಲ್ಲ, ಮೆಚ್ಚಲೂ ಇಲ್ಲ, ಬದಲಿಗೆ ಅದರ ವಿರುದ್ಧದ ಹೋರಾಟ ಇನ್ನೂ ಅವರ ಮುಂದಿದೆ.

ನನ್ನ ಗೆಳೆಯನೊಬ್ಬ, ಈತ ಯುವ ಕಾಂಗ್ರೆಸ್ ಮುಖಂಡನೂ ಹೌದು, ಸುಮಾರು ಐವತ್ತು ಎಕರೆ ಬಡಬಗ್ಗರ ದರಖಾಸ್ತು ಜಮೀನನ್ನು ತನ್ನ ಹೆಸರಿಗೆ ಬರೆಸಿಕೊಂಡು, ನೀಲಗಿರಿ ಹಾಕಿದ್ದಾನೆ. ಇನ್ನೇನು ಕಟಾವಿಗೆ ಬಂದಿರುವ ಈ ಮರದ ಆದಾಯದಿಂದ ಆತ ಇಷ್ಟಪಡುವ ಕಾರು, ಬಂಗಲೆ ದೊರಕುವುದಲ್ಲದೆ, ದಾರಾಳವಾಗಿ ಹಣ ಖರ್ಚುಮಾಡುತ್ತಾ ಜನರಾಜಕೀಯ ಮಾಡಲು ಅನುಕೂಲವಾಗುತ್ತದೆ. ಈತನೇನಾದರೂ ಈ ಭಾಗದ ರೈತರಿಗೆ ಆದರ್ಶಪ್ರಾಯನಾದರೆ, ಖಂಡಿತ ಇಲ್ಲಿನ ನೆಲಗಳೆಲ್ಲ ನೀಲಗಿರಿ ಪಾಲಾಗುತ್ತವೆ.

ಬಲಾಢ್ಯರು ದುರ್ಬಲರ ಜಮೀನನ್ನು ಬರೆಸಿಕೊಂಡು ನೀಲಗಿರಿ ಸಿಗಿಸಿ ಆರಾಮವಾಗಿರುತ್ತಾರೆ. ಐದು ವರ್ಷಕ್ಕೊಮ್ಮೆ ಕಟಾವಿಗೆ ಬರುವ ಈ ನೀಲಗಿರಿ ರೈತರನ್ನು ಸಂಪೂರ್ಣ ನಿರುದ್ಯೋಗಿಗಳಾಗಿ ಮಾಡುವುದಲ್ಲದೆ, ಆ ಮೂಲಕ ಸಾಮಾಜಿಕ ಕ್ಷೋಭೆಗೂ ದಾರಿ ಮಾಡಿಕೊಡುತ್ತದೆ. ಜಮೀನ್ದಾರರು ನೀಲಗಿರಿ ಹಾಕಿ ನಿರುದ್ಯೋಗಿಗಳಾದರೆ, ಅವರಿಗೆ ಭೂಮಿ ಮಾರಿಕೊಂಡವರೂ ನಿರುದ್ಯೋಗಿಗಳಾಗಿ, ಸರಕಾರದ ಸಾಲಮೇಳ ನಂಬಿ ಕೂರುತ್ತಾರೆ.

**ಈಗಾಗಲೇ ಶ್ರಮಜೀವಿಗಳೆಲ್ಲಾ ಸಾಲಮೇಳಕ್ಕೆ ಗಂಟುಬಿದ್ದು ಶಾಶ್ವತವಾಗಿ ಸರಕಾರದ ಆರ್ಥಿಕ ದಾಸ್ಯಕ್ಕೆ**

(3ನೇ ಪುಟಕ್ಕೆ)

## ಪದ್ಯದಂಕಣ

### ಸೊಬಗು

ವಸಂತ ಋತು ಚುಂಬನಕ್ಕೆ
ಭುವಿಯೆಲ್ಲ ಹಚ್ಚ ಹಸುರಿನ
ರೋಮಾಂಚನಕ್ಕೆ
ಚಿಗುರೊಡೆದ ಗಿಡ-ಮರ-ಬಳ್ಳಿ
ಪುಷ್ಪ-ಪರಾಗ-ಫಲ,
ಮಾತೆ ಪ್ರಕೃತಿಗೆ ಸಂಭ್ರಮದ ಉಡಿಗೆ
ಮುಂಜಾನೆಯ
ಅರುಣಾಂಬುಧಿಯ
ಅಲೆಯ ಸ್ಪಂದನಕ್ಕೆ
ಮೈಮರೆತ ಕೋಗಿಲೆಯ ಹಾಡು
ಹಿಮ್ಮೇಳದಲಿ ಹಕ್ಕಿಗಳ ಇಂಚರ.
ನೂರು ಕಣ್ಣರಳಿಸಿ
ನಾಟ್ಯದಲಿ ನಿರತ ನವಿಲು.
ಇದನ್ನೆಲ್ಲ ಕವಿತೆಯಾಗಿಸೆ
ಪದಗಳದೊ ಜಾರಿದವು
ಮುಗಿಲ ಉಲ್ಕೆಯಂತೆ.

—ಕೆ. ಎಸ್. ವತ್ಸಲಾ,
ಕಂಚಿನಕೆರೆ.

### ಚುಟುಕಗಳು

ಪ್ರೀತಿಸಿದ ತಪ್ಪಿಗೆ,
'ಏನು ಬೇಕಾದರೂ ಕೊಡುವೆ'ನೆಂದ
ಪ್ರಿಯತಮೆಗೆ,
ಕೇಳಿದ ಪ್ರಿಯತಮ
ದಾಕ್ಷಿಣ್ಯದಿಂದ
ವರ
ದಕ್ಷಿಣೆ !

ಹುಣ್ಣಿಮೆಯ ಬೆಳದಿಂಗಳ ಸ್ವಾಗತಿಸುವ,
ಅಮಾವಾಸ್ಯೆಯ ಕತ್ತಲ ತಿರಸ್ಕರಿಸುವ
ಅವಿರತ ಏರು-ಪೇರುಗಳ ಅನುಭವ
ಮಾನವ ಜೀವನದ ಒಂದು
ವಿಪರ್ಯಾಸ.

—ಶ್ರೀಂಗೇಶ್,
ಹುಬ್ಬಳ್ಳಿ.

# ಪರಿಚಿತನ ಸೋಗಿನಲ್ಲಿ ವಿವಾಹಿತಳಿಗೆ 'ಕೂಲ್ ಡ್ರಿಂಕ್ಸ್' ಕುಡಿಸಿದ; ಅರೆ ಪ್ರಜ್ಞೆಯಲ್ಲಿ ಮುಂಬೈಗೊಯ್ದು ವೇಶ್ಯಾವಾಟಿಕೆಗೆ ಮಾರಿದ

ಇಪ್ಪತ್ತು ವರ್ಷದ ಆ ಸುಂದರ ವಿವಾಹಿತ ಯುವತಿ ತನ್ನ ತೌರೂರಿಗೆ ಹೋಗಲು ರೈಲಿಗಾಗಿ ಬೆಂಗಳೂರಿನ ರೈಲ್ವೆ ಸ್ಟೇಶನ್ನಿನಲ್ಲಿ ಕಾಯುತ್ತಿದ್ದಳು. ಆದರೆ ಅವಳು ತಲುಪಿದ್ದು ತೌರನ್ನಲ್ಲ, ಸುಂದರ ಬದುಕಿನ ಅಭಿಲಾಷೆಯೆದುರು ನರಕವೆನ್ನಿಸುವಂಥ ಮುಂಬೈ ವೇಶ್ಯಾಗೃಹವೊಂದಕ್ಕೆ !

ಈಕೆಯ ತೌರು ದಕ್ಷಿಣ ಕರ್ನಾಟಕದ ಒಂದು ಊರು. ಈಕೆಯ ಹತ್ತಿರದ ಬಂಧುವೊಬ್ಬರು ಆ ತಾಲ್ಲೂಕಿನ ಕಾಂಗ್ರೆಸ್ ಮುಖಂಡರು. ಇವಳದು ಶ್ರೀಮಂತ ಮನೆತನ. ಅಂದು ಆಕೆ ಒಬ್ಬಳೇ ಹೊರಟಿದ್ದಳು.

ರೈಲ್ವೆ ಸ್ಟೇಶನ್ನಿನಲ್ಲಿ ಯಾರೋ ಒಬ್ಬ ಬಂದ. ಉಪಾಯವಾಗಿ ಮಾತಾಡಿಸಿ, ಈಕೆ ಎಲ್ಲಿಗೆ ಹೋಗುತ್ತಿದ್ದಾಳೆಂಬುದನ್ನು ತಿಳಿದುಕೊಂಡು ಯಾವುಯಾವುದೋ ಪರಿಚಯಗಳನ್ನು ಹೇಳುತ್ತ ಗುರುತಿನವನಂತೆ ನಟಿಸಿದ. ಹಾಗೇ ಅಲ್ಲೇ ಸ್ವಲ್ಪ 'ಕೂಲ್ ಡ್ರಿಂಕ್ಸ್' ಕೊಡಿಸಿದ. ಅಷ್ಟೇ ಆಕೆಗೆ ಗೊತ್ತು. ಒಂದು ರೀತಿ ಅರೆಪ್ರಜ್ಞೆಯಂಥ ಅವಸ್ಥೆ ಅವಳನ್ನಾವರಿಸಿತು.

ಪುನಃ ಪೂರ್ಣ ಪ್ರಜ್ಞೆ ಬಂದಾಗ ಅವಳು ಒಂದು ವೇಶ್ಯಾವಾಟಿಕೆಯಲ್ಲಿದ್ದಳು ! 4 ಸಾವಿರ ರೂಪಾಯಿಗೆ ಅವಳನ್ನು ಅಲ್ಲಿಗೆ ಮಾರಲಾಗಿತ್ತು.

ಅಲ್ಲಿ ಗಿರಾಕಿಗಳನ್ನು ತಣಿಸಲು ಒಪ್ಪದೆ ಪ್ರತಿಭಟಿಸಿದಾಗೆಲ್ಲ ಒಬ್ಬ ಗೂಂಡಾ ಸತತವಾಗಿ ಆಕೆಗೆ ಚಚ್ಚುತ್ತಿದ್ದ. ಈ ನರಕಯಾತನೆಯನ್ನವಳು ಸುಮಾರು ಒಂದು ತಿಂಗಳಿಗೂ ಹೆಚ್ಚು ಕಾಲ ಅನುಭವಿಸಿದಳು.

ಆದರೆ ಆಶ್ಚರ್ಯಕರವಾದ ರೀತಿಯಲ್ಲಿ 'ಸಾವಧಾನ್' ಎಂಬ ಸಾಮಾಜಿಕ ಸಂಸ್ಥೆಯೊಂದರ ಕಾರ್ಯಕರ್ತನೊಬ್ಬ ಆಕಸ್ಮಿಕವಾಗಿ ಆಕೆಯನ್ನು ಅಲ್ಲಿ ಸಂಧಿಸಿದ. ಹೀಗೆ 'ಪತಿತ' ಮಹಿಳೆಯರನ್ನು ಪಾರು ಮಾಡುವುದರಲ್ಲಿ ಮುಂಬೈಯ ಈ ಸಂಸ್ಥೆ ಕಾರ್ಯನಿರತವಾಗಿದೆ ಈಕೆಯ ಕರುಣ ಕಥೆಯನ್ನು ಕೇಳಿದ ಆತ 'ಸಾವಧಾನ್'ಗೆ ಸೂಚನೆ ಕೊಟ್ಟ. ಅನಂತರ ಪೋಲೀಸರ ನೆರವಿನೊಂದಿಗೆ ಆಕೆಯನ್ನು ರಕ್ಷಿಸಲಾಯಿತು.

ಈಗ ಈಕೆ ತನ್ನ ತಂದೆ-ತಾಯಿಗಳ ಜೊತೆ ಇರಲು ಬಯಸುತ್ತಾಳೆ ಈ ದುರಂತ 'ಕಥೆ'ಯನ್ನು 'ಇಂಡಿಯನ್ ಎಕ್ಸ್‌ಪ್ರೆಸ್' ಪ್ರಕಟಿಸಿದೆ.

# ಸೆಣಸಿ ಗಳಿಸಿದ ಸ್ವಾತಂತ್ರ್ಯ ನಮ್ಮದು.

## ಒಗ್ಗಟ್ಟಿನಿಂದ ಅದನ್ನು ರಕ್ಷಿಸಿಕೊಳ್ಳೋಣ, ಉಳಿಸಿಕೊಳ್ಳೋಣ.

ಎಲ್ಲಿ ಮನ ನಿರ್ಭೀತವೋ, ಎತ್ತಿದ ಶಿರವೆಲ್ಲಿ ಬಾಗದೋ
ಎಲ್ಲಿ ಜ್ಞಾನ ಸಂಚಯ ಮುಕ್ತ ಲಭ್ಯವೋ
ಎಲ್ಲಿ ವಿಶ್ವ ಛಿದ್ರ ಛಿದ್ರಗೊಂಡು, ಅತ್ತಲಿಂದ ಇತ್ತ ಒತ್ತುವ
ವಿಭಕ್ತ ಗೃಹದ ಗೋಡೆಗಳನ್ನು ಕಾಣದೋ
ಎಲ್ಲಿ ಸತ್ಯದರಿವಿನಾಳದಿಂದ ಪದ ಪುಂಜ ಸ್ತೋಮ ಹೊರ ಹೊಮ್ಮುವುದೋ
ಎಲ್ಲಿ ತೋಳ ತೆಕ್ಕೆಗೆ ಪರಿಪೂರ್ಣತೆಯ ಸೆಳೆವಂಥ
ಸತತ ಶ್ರಮದ ಗೆಯ್ಮೆ ಸಾಧ್ಯವೋ
ಎಲ್ಲಿ ಸ್ಫುಟ ವಿಚಾರ ಸ್ರೋತವೊಂದು ಜಡವೃತ್ತಿಯ
ಮರಳುಗಾಡು ಸೇರಿ ಇಂಗಿ ಹೋಗದೋ
ಎಲ್ಲಿ ನನ್ನ ಮನವು ನಿನ್ನ ಆಣತಿಯಂತೆ ವ್ಯಾಪನಶೀಲ
ವಿಚಾರವಾಗಿ ವಿಕಸನಗೊಳ್ಳುವುದೋ, ಕಾರ್ಯತತ್ಪರಗೊಳ್ಳುವುದೋ
ಓ ತಂದೆ, ಬಡಿದೆಬ್ಬಿಸಿ ನನ್ನ ದೇಶವನೊಯ್ಯಿ
ಆ ಸ್ವಾತಂತ್ರ್ಯದ ಸ್ವರ್ಗಕ್ಕೆ

**-ರವೀಂದ್ರನಾಥ ಠಾಕೂರ್**
(ಇಂಗ್ಲೀಷಿನಿಂದ ಅನುವಾದ)

ಭಾರತ ದಾಸ್ಯ ಶೃಂಖಲೆಯಿಂದ ಕಳಚಿಕೊಂಡಿತು. ವಸಾಹತು ಶಾಹಿ ಅಳಿದು, ಸ್ವತಂತ್ರ ರಾಷ್ಟ್ರ ಉದಯಿಸಿತು. ಎಳೆ ಹರಯದ ರಾಷ್ಟ್ರ ಉತ್ಸಾಹದಿಂದ ಪುಟಿಯುತ್ತಾ ಇಪ್ಪತ್ತನೆಯ ಶತಮಾನದ ಹಾದಿಯಲ್ಲಿ ತನ್ನ ಅಸ್ತಿತ್ವ ಅಚ್ಚೊತ್ತುವ ಭರವಸೆ ಮೂಡಿಸಿತು. ಸ್ವಾತಂತ್ರ್ಯ ಪಡೆದು ನಲವತ್ತು ಮಹತ್ತರ ವರ್ಷಗಳು ಮುಗಿದಿವೆ.

ಭಾರತ ಸ್ವಾತಂತ್ರ್ಯ ಹೋರಾಟದಲ್ಲಿ ಅನೇಕ ವ್ಯಕ್ತಿಗಳು ದೇಶಕ್ಕಾಗಿ ತಮ್ಮ ಜೀವ ತೆತ್ತು ಅಜರಾಮರರಾದರು. ಮಹಾತ್ಮಾಗಾಂಧಿ ಅವರ ಪಾತ್ರ ಮಹತ್ತರ. ಅಹಿಂಸೆಯೆಂಬ ಜೀವನ ತತ್ವದೊಂದಿಗೆ ದೇಶದ ಅಂತಃಕರಣವನ್ನು ವಶಪಡಿಸಿಕೊಳ್ಳಬಹುದೆಂಬುದನ್ನು ವಿಶ್ವಕ್ಕೆ ತೋರಿದ ಮಹಾನುಭಾವರು ಇವರು.

ವಿಶ್ವವೇ ಹೆಮ್ಮೆಪಡಬಹುದಾದ ಕೆಲವರು ಮಹಾನ್ ಪುರುಷರ ಸಾಮುದಾಯಿಕ ಜೀವನದರ್ಶನದ ಫಲವಾಗಿ ಸ್ವತಂತ್ರ ಭಾರತ ಆಧುನಿಕ ಭಾರತ ಎನಿಸಿಕೊಂಡಿತು. ತಿಲಕ್, ಗೋಖಲೆ, ಗಾಂಧಿ, ರಾನಡೆ, ನೆಹರೂ ಹೀಗೆ ಇನ್ನಿತರರು ಇವರ ಶ್ರೇಣಿಗೆ ಸೇರುತ್ತಾರೆ. ಸಾಮಾಜಿಕವಾಗಿ, ಆರ್ಥಿಕವಾಗಿ ಮತ್ತು ರಾಜಕೀಯವಾಗಿ ಭಾರತ ಮೇಲೆ ಮೇಲಕ್ಕೆ ಏರಲು ಇವರೆಲ್ಲ ಎಡೆಬಿಡದೆ ಶ್ರಮಿಸಿದರು. ಎಲ್ಲರಿಗೂ ನ್ಯಾಯ ಸಂದಾಯವಾಗಬೇಕು: ಎಲ್ಲರೂ ಸಮಾನರು ಎಂದಾಗಬೇಕು. ನ್ಯಾಯಬದ್ಧ ನಡವಳಿಕೆ ಆದರ್ಶವಾಗಬೇಕು ಎನ್ನುವ ಮೌಲ್ಯಗಳಿಗೆ ಮನ್ನಣೆ ದೊರಕಿಸಿಕೊಟ್ಟರು.

ಈ ಬಗೆಯ ಭದ್ರ ಬುನಾದಿ ಇದ್ದುದರಿಂದಲೇ ಸ್ವಾತಂತ್ರ್ಯಾನಂತರ ಭಾರತದ ಅಭಿವೃದ್ಧಿಯ ವೇಗ ಶೀಘ್ರಗತಿಗಾಗುವಂತೆ ಹೆಚ್ಚಿತು. ಕೈಗಾರಿಕಾ ಕ್ಷೇತ್ರ ಮತ್ತು ತಂತ್ರಜ್ಞಾನಗಳನ್ನು ಮಾತ್ರ ಬೆಳೆಸಲಿಲ್ಲ: ಗ್ರಾಮ ಜೀವನ ಸುಧಾರಣೆ ಮತ್ತು ಸಮಾಜ ಕಲ್ಯಾಣ ಸಹಾ ಸಾಧ್ಯವಾಗುವಂತೆ ಸುಯೋಜಿತ ಪ್ರಯತ್ನಗಳು ನಡೆದವು. ಬಡತನ ಅನಕ್ಷರತೆ ರೋಗರುಜಿನಗಳ ವಿರುದ್ಧ ಹೋರಾಡಲು ಸಂಪನ್ಮೂಲಕ್ಕಾಗಿ ತಡಕಾಡದ ತಾಣವೇ ಇಲ್ಲ.

ಸ್ವಾತಂತ್ರ್ಯ ಹೋರಾಟದಲ್ಲಿ ಕರ್ನಾಟಕವೂ ಧೀರೋದಾತ್ತ ಪಾತ್ರವಹಿಸಿತು. ಬ್ರಿಟಿಷರ ಬಿಗಿಮುಷ್ಟಿಯ ಆಡಳಿತದ ವಿರುದ್ಧ ಬಂಡೆದ್ದ ಪ್ರಸಂಗಗಳು 1800 ರಷ್ಟು ಹಿಂದೆಯೇ ನಡೆದುವು. ಇತಿಹಾಸದ ಪುಟಗಳಲ್ಲಿ ನಾಡಿನ ಈ ಭಾಗದ ರಾಷ್ಟ್ರಭಕ್ತರ ಸಾಹಸಚಕ್ರೈ ಅಚ್ಚೊತ್ತಿದಂತೆ ಮೂಡಿದೆ. ಕಿತ್ತೂರು ರಾಣಿ ಚೆನ್ನಮ್ಮ, ಹೈದರ್ ಅಲಿ, ಟಿಪ್ಪು ಸುಲ್ತಾನ್ ಇವರು ತೋರಿದ ಪ್ರತಿರೋಧ ಸದಾ ಕಾಲ ಸ್ಮರಣೀಯ. ಮುಂದೆ ಅಸಹಕಾರ ಚಳುವಳಿ ಮತ್ತು ಅಹಿಂಸಾತ್ಮಕ ಆಂದೋಲನಗಳಲ್ಲಿ ಇಲ್ಲಿನ ಜನಸಮುದಾಯ ತಾನೇ ತಾನಾಗಿ ತೊಡಗಿಸಿಕೊಂಡಿತು, ಸಕ್ರಿಯವಾಗಿ ಪಾಲ್ಗೊಂಡಿತು.

ಸ್ವಾತಂತ್ರ್ಯ ಬಂದ ಮೇಲೂ ಶ್ರೀ ಸಾಮಾನ್ಯನ ಹಿತಸಾಧನೆಗೆ ಶ್ರಮಿಸಬೇಕೆಂಬ ಕರ್ನಾಟಕದ ಸರ್ವತ್ರ ಅಭಿಲಾಷೆಯು ರಾಷ್ಟ್ರೀಯ ತತ್ವಧಾರೆಯ ಬಿಂಬ ಸ್ವರೂಪವೇ ಆಗಿದೆ. ಸ್ವಾತಂತ್ರ್ಯದ ಫಲ ಏನಿದೆಯೋ ಅದನ್ನು ದುರ್ಬಲರಿಗೂ ಸಹಾ ಹಂಚಲು ಕರ್ನಾಟಕದಲ್ಲಿ ಒಂದಾದ ಮೇಲೆ ಒಂದರಂತೆ ಅಧಿಕಾರಕ್ಕೆ ಬಂದ ಸರ್ಕಾರಗಳು ಶಕ್ತಿಮೀರಿ ಶ್ರಮಿಸಿವೆ. ಪ್ರಸ್ತುತ ಸರ್ಕಾರವು ಸಮಾಜದ ದುರ್ಬಲ ವರ್ಗಗಳಿಗೆ ನೆರವಾಗುವ ವಿವಿಧ ಹೊಸ ಬಗೆಯ ಕಾರ್ಯ ಯೋಜನೆಗಳನ್ನು ಜಾರಿ ಮಾಡಿದೆ.

ಗ್ರಾಮ ರಾಜ್ಯದ ಬುನಾದಿಯ ಮೇಲೆ ಆಡಳಿತ ಸಾಧ್ಯವಾಗಬೇಕು ಎಂಬುದು ಗಾಂಧೀಜಿಯವರ ಕನಸಾಗಿದ್ದಿತು. ಆ ಕನಸನ್ನು ಪೂರ್ಣ ಪ್ರಮಾಣದಲ್ಲಿ ನನಸಾಗಿಸಲು ಶ್ರಮಿಸಿದ ಕೀರ್ತಿ ಕರ್ನಾಟಕ ಸರ್ಕಾರಕ್ಕೆ ಸಂದಿದೆ. ಜಿಲ್ಲಾ ಪರಿಷತ್ತಿಗೆ ಈಚೆಗೆ ಚುನಾವಣೆ ಯಶಸ್ವಿಯಾಗಿ ನಡೆಯಿತು.

ನಲವತ್ತನೆಯ ಸ್ವಾತಂತ್ರ್ಯೋತ್ಸವ ಸಂಭ್ರಮದಲ್ಲಿ ಕರ್ನಾಟಕದ ಜನತೆ ಭಾರತದ ಜನರ ಜೊತೆ ಪಾಲ್ಗೊಳ್ಳುತ್ತಿದೆ. ಸ್ವಾತಂತ್ರ್ಯೋತ್ಸವದ ಆಚರಣೆ ಜೊತೆಗೆ ನಮ್ಮೆಲ್ಲ ಸ್ವಾತಂತ್ರ್ಯ ಹೋರಾಟಗಾರರನ್ನು ಸ್ಮರಿಸಿ ಶ್ರದ್ಧಾಂಜಲಿ ಅರ್ಪಿಸುತ್ತಿದೆ.

ಇಂದು ಭಾರತ ಎದುರಿಸುತ್ತಿರುವ ಸವಾಲುಗಳು ಹಲವಾರು. ದೇಶವು ಒಂದಾಗಿ ಉಳಿಯುವಂತೆ ನೋಡಿಕೊಳ್ಳಬೇಕಾಗಿದೆ. ಉಗ್ರವಾದಿ ಮತ್ತು ಪ್ರತ್ಯೇಕತಾವಾದಿ ಶಕ್ತಿಗಳು ಅಲ್ಲಲ್ಲಿ ತಲೆ ಎತ್ತುತ್ತಿವೆ. ಇಂತಹ ಸಮಯದಲ್ಲಿ ಭಾರತದ ಜನರೆಲ್ಲರೂ ಒಗ್ಗಟ್ಟಾಗಿದ್ದು ನಾವೆಲ್ಲರೂ ಭಾರತೀಯರು ಎಂಬ ಭಾವೈಕ್ಯತೆಯನ್ನು ಸಂರಕ್ಷಿಸಿಕೊಳ್ಳುವುದೇ ಸದ್ಯದ ಪರಮ ಗುರಿ.



## ಓದುಗರ ಪತ್ರಗಳು

# ಸಮಯಕ್ಕಿಲ್ಲದ ಉಳಿತಾಯ ಖಾತೆ ಹಣ

ಮಾನ್ಯರೆ,

ಹರಿಹರಪುರ ಅಂಚೆ ಕಚೇರಿಯಲ್ಲಿ ನನ್ನ ಮತ್ತು ನನ್ನ ಮಗನ ಹೆಸರಿನಲ್ಲಿ ಕಳೆದ ವರ್ಷ 2 ಉಳಿತಾಯ ಖಾತೆಗಳನ್ನು ವಿಶ್ವಾಸಿಗಳಾದ ಸರ್ಕಾರಿ ನೌಕರರ ಒತ್ತಾಯಕ್ಕಾಗಿ ಮಾಡಿಸಿದ್ದೆ (ಸಂಖ್ಯೆ 1151263 ಮತ್ತು 264.) ಅವುಗಳಿಗೆ 1ವರ್ಷ ಆದ ನಂತರ 1.8.87 ರಂದು ಸದರಿ ಅಂಚೆ ಕಚೇರಿಗೆ ಹೋಗಿ ಖಾತೆಗಳನ್ನು ಮುಕ್ತಾಯಗೊಳಿಸಲು ಕೇಳಿದಾಗ ಅದಕ್ಕೆ ಬೇಕಾದ ಫಾರಂಗಳನ್ನೆಲ್ಲ ಭರ್ತಿ ಮಾಡಿಸಿ ಸಹಿ ತೆಗೆದುಕೊಂಡು 10.8.87 ರಂದು ಹಣ ವಾಪ್ಸು ಕೊಡುವುದಾಗಿ ಹೇಳಿ ಅಕ್ನಾಲೆಜ್‌ಮೆಂಟ್ ಕೊಟ್ಟರು.(ನಂ. 14097/3.) ಅಂದಿನಿಂದ ಪ್ರತಿದಿನ ಆ ಕಚೇರಿಗೆ ಅಲೆದಿದ್ದೇನೆ. ಆದರೆ 18.8.87 ರಂದು ಹಣ ಪಡೆಯಲು ಪುನಃ ಹೋದಾಗ "ಇನ್ನೂ ಬಂದಿಲ್ಲ, ಇನ್ನೊಂದು ಅರ್ಜಿ ಕೊಡಿ ಅಥವಾ ಕೊಪ್ಪ ಅಂಚೆ ಕಚೇರಿಗೆ ಫೋನ್ ಮಾಡಿ" ಮುಂತಾಗಿ ಹೇಳಿದರು. ಅಂತೂ ನನ್ನ ಹಣ ನನ್ನ ತುರ್ತಿಗೆ ಒದಗಲಿಲ್ಲ.

**ನ್ಯಾಯವಾಗಿ ಈ ಉಳಿತಾಯ ಖಾತೆಗಳ ಬಗ್ಗೆ ಅದೃಷ್ಟ ಬಹುಮಾನದ ಡ್ರಾ ಆಗಿ ನನ್ನಂಥ ಯಾರಿಗೋ ಮಾರುತಿ ಕಾರು ಇತ್ಯಾದಿ ಬಹುಮಾನಗಳು ಬಂದರಿಬೇಕಿತ್ತು.** ಅದಂತೂ ಆಗಲಿಲ್ಲ. ಹೋಗಲಿ, ನಮ್ಮ ಹಣವಾದರೂ ನಮ್ಮ ಸಮಯಕ್ಕೆ ಒದಗಲಿಲ್ಲವೆಂದರೆ ಹೇಗೆ? ಇದಕ್ಕಿಂತಲೂ ತುರ್ತಿನಲ್ಲಿ ಹಣ ಬೇಕಾದವರಿರಬಹುದು. ಆಗಲೂ ಹೀಗೇ ಎಂದಾದರೆ ಇಂಥ ಖಾತೆಗಳನ್ನು ನಾವೇಕೆ ತೆರೆಯಬೇಕು ಎನ್ನಿಸಿದರೆ ತಪ್ಪೆ?

—ಎಚ್. ಎಲ್. ಬಾಲಚಂದ್ರ
ಹರಿಹರಪುರ.

## ಕೊಪ್ಪ ಪಶು ವೈದ್ಯ ಇಲಾಖೆ ಇದನ್ನು ಗಮನಿಸಲಿ

ಮಾನ್ಯರೆ,

ತಾ|| 16-8-87ರ ಮುಂಜಾವು ಪತ್ರಿಕೆಯಲ್ಲಿ ಪ್ರಕಟವಾದಂತೆ ಪಶುವೈದ್ಯ ಇಲಾಖೆಯ ಚಿಕಿತ್ಸಾ ಘಟಕದ ಚಲನ ಪಟ್ಟಿಯ ಪ್ರಕಾರ ಕೊಪ್ಪದಿಂದ ಜಯಪುರದವರೆಗೆ ಕೆಲವು ಊರುಗಳು ಬಿಟ್ಟುಹೋಗಿವೆ. ಅಲ್ಲದೆ 5 ದಿನಗಳ ಚಲನ ಪಟ್ಟಿ ಇದೆ. ಕೈಬಿಟ್ಟ ಊರುಗಳನ್ನು ಸೋಮವಾರಕ್ಕೆ ಪ್ರಾರಂಭಿಸಿ, ಕೊಪ್ಪದಿಂದ ಹೊರಟು ಸೋಮ್ಲಾಪುರ, ಅಂದಗಾರು, ಕುಂಚೂರು, ನಾರ್ವೆ, ಬಿಳುಗೊಳ, ಕಲ್ಕೆರೆ, ತೆಂಗಿನಮನೆ, ಲೋಕನಾಥಪುರ, ಜಯಪುರ-ಹೀಗೆ ಚಲನೆ ಮಾಡಬಹುದು.

ಅಥವಾ

ಜಯಪುರ, ಆಗಳಗಂಡಿ, ಬಿ ಜಿ. ಕಟ್ಟೆ ಚಲನ ಮಾರ್ಗವನ್ನು ಬದಲಿಸಿ- ಜಯಪುರ, ಲೋಕನಾಥಪುರ, ತೆಂಗಿನಮನೆ, ಕಲ್ಕೆರೆ, ಬಿ. ಜಿ. ಕಟ್ಟೆ, ಉತ್ತಮೇಶ್ವರ, ಎತ್ತಿನಹಟ್ಟ, ಆಗಳಗಂಡಿ, ಹೆಗ್ಗಾರುಕೊಡಿಗೆ, ಬೈರೇದೇವರು, ಮೇಗೂರು ಈ ರೀತಿ ಬದಲಾಯಿಸಿದರೂ ಆಗಬಹುದು. ಹಾಲಿ ಕೈ ಬಿಟ್ಟಿರುವ ನರಸೀಪುರ, ಕಲ್ಕೆರೆ-ಮಂಡಲಗಳು ಈ ವ್ಯಾಪ್ತಿಯಲ್ಲಿ ಬರುವಂತೆ ಚಾಲನೆ ಪಟ್ಟಿ ತಯಾರಿಸುವುದು ಒಳ್ಳೆಯದು. ಈ ಬಗ್ಗೆ ಸಂಬಂಧ ಪಟ್ಟವರು ಕೂಡಲೇ ಗಮನ ಹರಿಸಲೆಂದು ಆಶಿಸುತ್ತೇನೆ.

ವಿ. ಸೂ: ಸೋಮವಾರ ಕೊಪ್ಪದಿಂದ ಬಿಳುಗೊಳದವರೆಗೆ ಬಂದು ಹರಿಹರಪುರ ಭಂಡಿಗಡಿ ಈ ಕಡೆ ಹೋಗಬಹುದು.

—ಟಿ. ವಿ. ಎಸ್. ಹೇರಳೆ,
ತುಳುವಿನಕೊಪ್ಪ.

## ಹಾವಿನ ವಿಷಕ್ಕೆ ಇಂಜೆಕ್ಷನ್ ಎಲ್ಲೆಡೆ ದೊರೆಯಲಿ

ಮಾನ್ಯರೆ,

ಈಚೆಗೆ ಹಾಸನ ಜಿಲ್ಲೆಯ ಒಬ್ಬ ಕೃಷಿ ಕಾರ್ಮಿಕ ಹಾವು ಕಚ್ಚಿದ್ದಕ್ಕೆ ಹೇರೂರಿಗೆ ಬಂದು ಹಳ್ಳಿ ಔಷಧಿ ಪಡೆದು, ಹಾವಿನ ವಿಷಕ್ಕೆ ಎಲ್ಲಿಯೂ ಇಂಜೆಕ್ಷನ್ ದೊರಕದಿರುವ ಬಗ್ಗೆ ತಮ್ಮ ಅಳಲನ್ನು ತೋಡಿಕೊಂಡರು. ಚಿಕ್ಕಮಗಳೂರು ಜಿಲ್ಲೆಯ ಎಲ್ಲಾ ಆಸ್ಪತ್ರೆಗಳಲ್ಲೂ ಅಥವಾ ಕಡೇಪಕ್ಷ ಜಿಲ್ಲಾ ಆಸ್ಪತ್ರೆ ಹಾಗೂ ಜಿಲ್ಲೆಯ ಕೆಲವು ಪ್ರಮುಖ ಆಸ್ಪತ್ರೆಗಳಲ್ಲಾದರೂ ಈ ಇಂಜೆಕ್ಷನ್ ತಪ್ಪದೆ ದೊರೆಯುವಂತಾಗಬೇಕೆಂದು ಸಂಬಂಧಪಟ್ಟವರಲ್ಲಿ ಒತ್ತಾಯಿಸುತ್ತೇನೆ.

—ಎಂ. ವಿ. ಗಂಗಾಧರ್,
ಗುಡ್ಡೇತೋಟ.

## ನಿಲುವಾಗಿಲು ಮಂಡಲ ಪ್ರಥಮ ಸಭೆ

ನಿಲುವಾಗಿಲು: ಇಲ್ಲಿನ ಮಂಡಲ ಪಂಚಾಯ್ತಿಯ ಪ್ರಥಮ ಸಭೆ 12 ರಂದು ಪ್ರಧಾನರಾದ ಎಚ್. ಎಂ. ಕೃಷ್ಣಮೂರ್ತಿ ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ಎಲ್ಲಾ ಸದಸ್ಯರೂ ಹಾಜರಿದ್ದರು. ವೈದ್ಯಾಧಿಕಾರಿಗಳು, ರಕ್ಷಣಾ ಇಲಾಖೆಯವರು ಹಾಗೂ ಚಿ. ಕೊ. ಗ್ರಾಮೀಣ ಬ್ಯಾಂಕಿನ ಶಾನುವಳ್ಳಿ ಶಾಖೆಯ ಮ್ಯಾನೇಜರ್ ಹಾಜರಿದ್ದರು.

ಮನೆ ಇಲ್ಲದವರಿಗೆ ಮನೆ ಕಲ್ಪಿಸಬೇಕೆಂದೂ, ಐ ಆರ್. ಡಿ. ಪಿ. ಸಾಲ ದುರುಪಯೋಗವಾಗದಂತೆ ಸದಸ್ಯರು ಎಚ್ಚರಿಕೆ ವಹಿಸಬೇಕೆಂದೂ ಪಂಚಾಯ್ತಿ ಮಳಿಗೆಗಳ ಬಾಡಿಗೆ ಕೊಡದಿರುವರ ಮೇಲೆ ಸೂಕ್ತ ಕ್ರಮ ಕೈಗೊಂಡು ಪುನಃ ಹರಾಜು ಹಾಕಬೇಕೆಂದೂ ಸರ್ವಾನುಮತದಿಂದ ತೀರ್ಮಾನಿಸಲಾಯಿತು.

(ವರದಿ: ಸುಧೀರ್ ಅನಂದೂರು.)

### ಬರ ಪರಿಸ್ಥಿತಿ : ವಿವಿಧ ಅಧಿಕಾರಿಗಳಿಗೆ

# ನ.ರಾ. ಪುರ ತಾ|| ಜನತಾ ಕಾರ್ಯದರ್ಶಿ ಮನವಿ

(ವರದಿ : ಎಂ. ಐ ಶ್ರೀನಿವಾಸ ಮೂರ್ತಿ)

ನ. ರಾ. ಪುರ: ಈ ತಾಲ್ಲೂಕಿನಾದ್ಯಂತ ಬರ ಪರಿಸ್ಥಿತಿ ತೀವ್ರವಾಗಿದ್ದು, ಈ ಸಂಬಂಧದಲ್ಲಿ ತಾನು ವಿವಿಧ ಅಧಿಕಾರಿಗಳಿಗೆ ಮಾಡಿರುವ ಮನವಿಗಳ ಬಗ್ಗೆ ಜನತಾ ಕಾರ್ಯದರ್ಶಿ ಬಿ. ಆರ್. ಕೃಷ್ಣಮೂರ್ತಿ 'ಮುಂಜಾವು'ಗೆ ತಿಳಿಸಿದ್ದಾರೆ.

ಜು. 28ರಂದು ಬರ ಸ್ಥಿತಿ ಸಮೀಕ್ಷೆಗೆ ಜಿ.ಪ. ಸದಸ್ಯ ಮೂಗ ಚಂದ್ರಶೇಖರ್ ಮತ್ತು ತರೀಕೆರೆ ಉಪ ವಿಭಾಗಾಧಿಕಾರಿಗಳೊಂದಿಗೆ ತಾನು ಸಹ ತೆರಳಿದ್ದು, ತಾಲ್ಲೂಕನ್ನು ಬರ ಪೀಡಿತವೆಂದು ಘೋಷಿಸಲು ಸರ್ಕಾರಕ್ಕೆ ಮನವಿ ಕಳಿಸಿದ್ದಾಗಿ ತಿಳಿಸಿದ್ದಾರೆ.

ಕೆಟ್ಟಿರುವ ಕೊಳವೆ ಬಾವಿಗಳ ದುರಸ್ತಿ ಮತ್ತು ಹೊಸ ಬಾವಿಗಳ ನಿರ್ಮಾಣ (ಪಿ. ಎಚ್. ಇ.), ಪಟ್ಟಣ ವ್ಯಾಪ್ತಿಯಲ್ಲಿ ಕುಡಿವ ನೀರಿಗೆ ತೊಂದರೆ (ಜಿ.ಪ. ಕಾರ್ಯದರ್ಶಿ), ಸಣ್ಣ ಉಳಿತಾಯ ಸರ್ಟಿಫಿಕೇಟ್ ಕೊಳ್ಳಲು ರೈತರಿಗೆ ಒತ್ತಾಯಿಸದಿರುವುದು (ತಹಸೀಲ್ದಾರ್), ಬಾಳೆಹೊನ್ನೂರು ಹೋಬಳಿಗೆ ಸೇರಿದ್ದರೂ ನ. ರಾ. ಪುರಕ್ಕೆ ಹತ್ತಿರವಿರುವ ಬಾಳೆ ಮತ್ತು ಸೀತೂರು ಮಂಡಲಗಳ ರೈತರಿಗೆ ಪಹಣಿ ಇತ್ಯಾದಿ ದಾಖಲೆಗಳನ್ನು ನ ರಾ. ಪುರದಲ್ಲೇ ಕೊಡುವ ವ್ಯವಸ್ಥೆ (ಶಾಸಕರು, ಜಿಲ್ಲಾ ಮಂತ್ರಿ), ನೀರಾವರಿ ಪಂಪ್‌ಸೆಟ್‌ಗಳಿಗೆ ಜರೂರು ವಿದ್ಯುತ್ ಪೂರೈಕೆ (ಕ.ವಿ.ಮಂ.)—ಇವೇ ಮುಂತಾದ ವಿಷಯಗಳಲ್ಲಿ ತಾನು ಮಾಡಿರುವ ಮನವಿಯ ಬಗ್ಗೆ ಆಯಾ ಅಧಿಕಾರಿಗಳು ಮತ್ತು ಸಂಬಂಧಪಟ್ಟವರು ಸೂಕ್ತ ಕ್ರಮದ ಭರವಸೆ ನೀಡಿ ಈಗಾಗಲೇ ಕಾರ್ಯಪ್ರವೃತ್ತರಾಗಿರುವುದಾಗಿ ಕೃಷ್ಣಮೂರ್ತಿ ತಿಳಿಸಿದ್ದಾರೆ.

# ನೀಲಗಿರಿ ಮತ್ತು ಕಾರಂತರು

(2ನೇ ಪುಟದಿಂದ)

**ತುತ್ತಾಗುವುದನ್ನು ನೋಡುತ್ತಿದ್ದೇವೆ. ಮುಂದೆ ನೀಲಗಿರಿ ಸಂಬಂಧವಾಗಿ ನಿರುದ್ಯೋಗಿಗಳಾದವರನ್ನು ಸುಮ್ಮನಿರಿಸಲು ಅಥವ ಹಳ್ಳಿಕ್ಕಲು ಹೊಸ ಕುತಂತ್ರಗಳನ್ನೇ ಹುಡುಕಬೇಕಾಗುತ್ತದೆ. ಒಂದು ಸಸ್ಯ ಒಂದೇ ಅನಾಹುತವೆಸಗುವುದಾದರೆ ತಡೆದುಕೊಳ್ಳಬಹುದು ಆದರೆ ನೀಲಗಿರಿಯ ಸಂಬಂಧ ಮನುಷ್ಯ ಸಂಬಂಧಗಳ ನಾಶದವರೆಗೂ ಹರಡಿಕೊಂಡಿದೆ. ಪರಿಸರ ಸಮತೋಲನವನ್ನು ಪ್ರತಿಪಾದಿಸುವ ಕಾರಂತರು 'ನೀಲಗಿರಿಯಿಂದ ಅಪಾಯವಿಲ್ಲ' ಎಂದು ಹೇಳುವವರ ಜೊತೆಗೆ ಕಾಫಿ, ಅಡಿಕೆಯನ್ನೆಲ್ಲ ನೀಲಗಿರಿಗೆ ಹೋಲಿಸಿದ್ದಾರೆ.**

ಸಾವಿರಾರು ಜನರಿಗೆ ಸದಾ ಕೆಲಸವೊದಗಿಸಿರುವ ಕಾಫಿ, ತಾನಿರುವಲ್ಲಿ ಒಂದು ಸಂಸ್ಕೃತಿಯನ್ನು ಕಾಪಾಡುತ್ತ ಬೆಳೆಸುತ್ತದೆ. ಆದರೆ ನೀಲಗಿರಿಯಿಂದ ಇದು ಸಾಧ್ಯವಿಲ್ಲ. ನಮ್ಮ ಬರಗಾಲ ಪೀಡಿತ ಪ್ರದೇಶದಿಂದ ಓಡಿ ಒಂದ ಜನರಿಗೆಲ್ಲ ಕೆಲಸಕೊಡುವ ಕಾಫಿಯನ್ನು ನೀಲಗಿರಿಗೆ ಹೋಲಿಸುವುದು ಸರಿಯಲ್ಲ. ಹಾಗೆಯೇ ಆಗಾಗ್ಗೆ ಜೀಸಾಯ ಅಪೇಕ್ಷಿಸುವ ಅಡಕೆಯನ್ನೂ ನೀಲಗಿರಿಗೆ ಹೋಲಿಸುವುದು ಸಮಂಜಸವಲ್ಲ. ಈ ಬೆಳೆಗಳು ಅಪಾಯಕಾರಿಯಾದರೂ ಸಾಮಾಜಿಕ ಅಸ್ತವ್ಯಸ್ತತೆಗೆ ಈವರೆಗೆ ಕೈಹಾಕಿಲ್ಲ. ಏಕೆಂದರೆ ಇವುಗಳಿಗೆ ನಿರ್ದಿಷ್ಟವಾದ ಭೂಪ್ರದೇಶವಿದೆ. ನೀಲಗಿರಿಯಂತಹ ಸರ್ವವ್ಯಾಪಿಗುಣ ಈ ವಾಣಿಜ್ಯ ಬೆಳೆಗೆ ಇಲ್ಲದ ಪ್ರಯುಕ್ತ ಕಾರಂತರ ಹೇಳಿಕೆ ಆಶ್ಚರ್ಯ ಹುಟ್ಟಿಸಿತ್ತು.

ನೀಲಗಿರಿ ವಿರೋಧದಲ್ಲಿ ನಮ್ಮ ಜನಗಳು ಅಪ್ರಜ್ಞಾಪೂರ್ವಕವಾದರೂ ಅದರ ಎಲ್ಲ ಅನಾಹುತದ ವಿರುದ್ಧ ಸಿಡಿದೆದ್ದಿದ್ದಾರೆ. ಈಚೆಗೆ, ಮರ ಕಡಿಯುವ ಬದಲು ನೆಟ್ಟ ಎರಡು ಮೂರು ದಿನಕ್ಕೋಗಿ ರಾತ್ರಿವೇಳೆಯಲ್ಲಿ ಇರಿದು ಬರುತ್ತಿದ್ದಾರೆ. ಕೆಲವು ಕಡೆ ನರ್ಸರಿ ನಾಶ ಮಾಡುವಷ್ಟು ಸಿಟ್ಟು ರೈತರಲ್ಲಿದೆ. ಆ ಮಟ್ಟಿಗೆ ನೀಲಗಿರಿ ಇಲ್ಲಿ ಪರಕೀಯತೆ ಅನುಭವಿಸುತ್ತಿರುವುದರ ಜೊತೆಗೆ ನಮ್ಮ ಜನಗಳಿಗೆ ಭಯ ಹುಟ್ಟಿಸಿದೆ.

ಕಾರಂತರೇ ಹೇಳುವಂತೆ ಆ ಸಸ್ಯ ಇಲ್ಲಿನ ಜನಸಂಖ್ಯೆ, ಅರಣ್ಯವಿಸ್ತಾರಕ್ಕೆ ಸಮನಾಗಿದ್ದರೆ ಯಾರೂ ಆತಂಕಗೊಳ್ಳುತ್ತಿರಲಿಲ್ಲ. ಒಂದು ನಾಡಿನ ಸಂಸ್ಕೃತಿಯ ನಾಶದತ್ತ ಅದು ಹೆಜ್ಜೆ ಇಡತೊಡಗಿದ್ದರಿಂದ ಅದರ ವಿರುದ್ಧದ ಹೋರಾಟ ಅನಿವಾರ್ಯವಾಯಿತು. ಈ ಅನಿವಾರ್ಯತೆಯಲ್ಲಿ ಕಾರಂತರ ವೈಜ್ಞಾನಿಕ ವಿವರಣೆಯನ್ನು ಗೌರವಿಸಿ, ಈ ಸಸ್ಯದ ವಿರುದ್ಧ ಕಾರ್ಯಪ್ರವೃತ್ತರಾಗುವುದು ಧನಿಪ್ಯಕ್ಕೆ ಒಳ್ಳೆಯದು.

(ಸೌಜನ್ಯ: 'ಲಂಕೇಶ್ ಪತ್ರಿಕೆ')

## ಕೊಪ್ಪ ತಂತಿ ಕಚೇರಿ ಸ್ಥಳಾಂತರ

ಕೊಪ್ಪ: ಇಲ್ಲಿನ ತಂತಿ ಕಚೇರಿಯನ್ನು ಆ. 15ರಿಂದ ಪ್ರಧಾನ ಅಂಚೆ ಕಚೇರಿಯ ಆವರಣಕ್ಕೆ ಸ್ಥಳಾಂತರಿಸಲಾಗಿದೆ. ಈವರೆಗೂ ಇವೆರಡು ಕಚೇರಿಗಳೂ ಪ್ರತ್ಯೇಕವಾಗಿದ್ದು ಸಾರ್ವಜನಿಕರಿಗೂ ಅಲ್ಲಿನ ಸಿಬ್ಬಂದಿಗೂ ತೊಂದರೆಯಾಗುತ್ತಿದ್ದುದನ್ನು ಇಲ್ಲಿ ಸ್ಮರಿಸಬಹುದು.



### ಶಿವಮೊಗ್ಗ ಅಡಿಕೆ ಧಾರಣೆ
**ತಾ|| 20.8.1987**

ಸರಕು : 4900 - 5151
ಬೆಟ್ಟೆ : 2380 - 3200
ಗೊರಬಲು : 750-989

### ಸಾಗರ ಅಡಿಕೆ ತಾ|| 20.8.1987

ಇಡಿ ಅಡಿಕೆ ರೂ. 1880-2109
ಚಾಲಿ ರೂ. 1161-1352
ಸಿಪ್ಪೆ ಗೋಟು ರೂ. 309-596

### ಮಂಗಳೂರು ಧಾರಣೆ
**ದಿನಾಂಕ 20-8-87**

ಏಲಕ್ಕಿ ರೂ. 125-220
ಕಾಳುಮೆಣಸು 5486

### ಸಕಲೇಶಪುರ ಏಲಕ್ಕಿ ಧಾರಣೆ

ಸರಾಸರಿ 160ರಿಂದ 180ರೂ,

ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: ಶಿವಮನೆ ನಾಗರಾಜ್, ಅಚ್ಚು: ದೀಪಿಕೆಗೆ ಅಚ್ಚುಕೂಟ, ಕೊಪ್ಪ